ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತೊಂದನೆಯ ಅಧಿವೇಶನ

ಶುಕ್ರವಾರ, ದಿನಾಂಕ: 25ನೇ ಸೆಪ್ಟಂಬರ್, 2020

ನರೇಗಾ ಯೋಜನೆ ಕುರಿತು

ಶ್ರೀ ಅ. ದೇವೇಗೌಡ (ಪದವೀಧರರ ಕ್ಷೇತ್ರ):-

610 (1108) ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ನರೇಗಾ ಯೋಜನೆ ಕಾಮಗಾರಿಗಳನ್ನು ಕೆಲವು ಮಾಜಿ ಸದಸ್ಯರು ಹಾಗೂ ಅಧ್ಯಕ್ಷರು ಮಾನವ ಶ್ರಮಕ್ಕೆ ಬದಲಾಗಿ ತಾವೇ ಯಂತ್ರಗಳ ಹಾಗೂ ಗುತ್ತಿಗೆ ಮೇಲೆ ನಿರ್ವಹಿಸಿ ರೈತರ ಬ್ಯಾಂಕ್ ಖಾತೆಗಳಿಗೆ ಹಣ ಹಾಕಿಸಿ ನಂತರ ಅದನ್ನು ಅವರ ಮೂಲಕ ತಾವೇ ಪಡೆದುಕೊಂಡು ಕೋಟ್ಯಾಂತರ ರೂಪಾಯಿ ವಂಚಿಸಿದ್ದು, ಈ ಬಗ್ಗೆ ಇಲಾಖೆ ಉನ್ನತಾಧಿಕಾರಿಗಳಿಂದ ತನಿಖೆ ಮಾಡಿಸಿ ಸೂಕ್ತ ಕ್ರಮ ಕೈಗೊಳ್ಳಲಾಗುವುದೇ;

(ಆ) ಇನ್ನು ಮುಂದೆ ಈ ರೀತಿ ಯೋಜನೆ ಮೂಲ ಉದ್ದೇಶವನ್ನು ಬುಡಮೇಲು ಮಾಡಿ ಯಂತ್ರಗಳಿಂದ ಮಾಜಿ ಸದಸ್ಯರೇ ಕೆಲಸ ಮಾಡಿಸಿ ಸರ್ಕಾರದ ನೀತಿ ನಿಯಮಗಳನ್ನೇ ಬುಡಮೇಲು ಮಾಡಿ ವಂಚಿಸಿ, ಕೋಟ್ಯಾಂತರ ರೂ. ಗಳು ಹಾಳು, ನಷ್ಟ ಮಾಡುತ್ತಿರುವುದನ್ನು ತಡೆಯಲು ಸರ್ಕಾರ ಕೂಡಲೇ ಕೈಗೊಳ್ಳುವ ಕ್ರಮಗಳೇನು ?